# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1005 (1006)
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು
ಉತ್ತರಿಸುವ ದಿನಾಂಕ : 29.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಒಂದು ವರ್ಷದಿಂದ ಹಾಗೂ ಕೋವಿಡ್ ಅವಧಿಯಿಂದ ಇದುವರೆಗೆ ಮೈಸೂರು ಜಿಲ್ಲೆಯಲ್ಲಿ ಯಾವ ಯಾವ ಕೈಗಾರಿಕಾ ಘಟಕಗಳು ಮುಚ್ಚಿವೆ; ಎಷ್ಟು ಜನ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ; (ವಿವರ ಒದಗಿಸುವುದು) | ಕಳೆದ ಒಂದು ವರ್ಷದಿಂದ ಹಾಗೂ ಕೋವಿಡ್ ಅವಧಿಯಿಂದ ಇದುವರೆಗೆ ಮೈಸೂರು ಜಿಲ್ಲೆಯಲ್ಲಿ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳಲ್ಲಿ ಕೆಲಸ ಕಳೆದು ಕೊಂಡಿರುವ ವಿವರ ಈ ಕೆಳಕಂಡಂತಿರುತ್ತದೆ. |

| ಕ್ರ ಸಂ. | ಮುಚ್ಚಲ್ಪಟ್ಟಕೈಗಾರಿಕಾ ಘಟಕಗಳು/ಸಂಸ್ಥೆಗಳು | ಕೆಲಸ ಕಳೆದುಕೊಂಡ ಕಾರ್ಮಿಕರ ಸಂಖ್ಯೆ |
|---|---|---|
| 1. | ಮೆ: ರೀಡ್ & ಟೇಲರ್, ನಂಜನಗೂಡು | 984 |
| 2. | ಮೆ: ಜೆ.ಜೆ.ಎಸ್. ಪೇಪರ್ ರಿಸೈಕ್ಲಿಂಗ್, ನಂಜನಗೂಡು | 46 |
| | ಒಟ್ಟು | **1030** |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಈ ಕಾರ್ಖಾನೆಗಳನ್ನು ಪುನರ್ ಆರಂಭಿಸಲು ಕ್ರಮ ಜರುಗಿಸಲಾಗುವುದೇ; ಕೆಲಸ ಕಳೆದು ಕೊಂಡಿರುವ ಕಾರ್ಮಿಕರಿಗೆ ಮ್ಯಾನೇಜ್‌ಮೆಂಟ್ ಕಡೆಯಿಂದ ಸೂಕ್ತ ಪರಿಹಾರ ಕೊಡಲು ಕ್ರಮ ಜರುಗಿಸಲಾಗುವುದೇ? | ಸಹಾಯಕ ಕಾರ್ಮಿಕ ಆಯುಕ್ತರು, ಮೈಸೂರು ವಿಭಾಗ ಹಾಗೂ ಕಾರ್ಮಿಕ ಅಧಿಕಾರಿ, ಮೈಸೂರು ಉಪ ವಿಭಾಗ ಕಛೇರಿಯಲ್ಲಿ ಕಾರ್ಮಿಕರಿಂದ ಹಾಗೂ ಆಡಳಿತ ವರ್ಗದವರಿಂದ ಸಲ್ಲಿಸಲಾಗಿರುವ ಅರ್ಜಿಯನ್ನು ದಾಖಲಿಸಿಕೊಂಡು ಆಡಳಿತ ವರ್ಗ ಹಾಗೂ ಕಾರ್ಮಿಕರ /ಕಾರ್ಮಿಕ ಸಂಘದವರ ಸಂಧಾನ ಸಭೆಯನ್ನು ನಿಗಧಿಪಡಿಸಿ ಕ್ರಮ ಜರುಗಿಸಲಾಗುತ್ತಿದೆ.<br><br>ಕೈಗಾರಿಕಾ ಸಂಸ್ಥೆಯು ಮುಚ್ಚಿದಾಗ ಕೈಗಾರಿಕಾ ವಿವಾದಗಳ ಕಾಯ್ದೆ 1947 ಕಲಂ 25 FFA ಅನ್ವಯ ಪರಿಹಾರ ಮುಚ್ಚುವಿಕೆಯನ್ನು ಆಡಳಿತ ವರ್ಗದವರು ಪಾವತಿಸಬೇಕಿರುತ್ತದೆ. ಇದು ಬದ್ಧ ಪರಿಹಾರವಾಗಿದ್ದು ಈ ಪರಿಹಾರ ಮೊತ್ತವನ್ನು ಪಾವತಿಸಬೇಕಿರುತ್ತದೆ. ಈ ಕುರಿತು ಕಾರ್ಮಿಕ ಇಲಾಖೆ ಕ್ರಮ ಕೈಗೊಂಡಿರುತ್ತದೆ. |

ಸಿಐ 263 ಎಸ್‌ಪಿಐ 2020

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು